ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಹತ್ತಿ ಬೆಳೆಗಾರರ ಹಾಗೂ ಕರ್ನಾಟಕ ಕೈಗಾರಿಕಾ ಕಲ್ಯಾಣ ಅಭಿವೃದ್ಧಿ ನಿಗಮದ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

867 (1114) ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಇಡೀ ದೇಶದಲ್ಲಿ ಕರ್ನಾಟಕವು ಹತ್ತಿ ಬೆಳೆಯುವಲ್ಲಿ ಅಗ್ರ ಸ್ಥಾನದಲ್ಲಿದ್ದು, ಅದೇ ರೀತಿ ರಾಜ್ಯದಲ್ಲಿ ಹಲವಾರು ನೇಯ್ಗೆ ಗಿರಣಿಗಳು ಹಾಗೂ ಹತ್ತಿರ ಗಿರಣಿಗಳಿದ್ದು, ಹತ್ತಿ ಬೆಳೆಗಾರರನ್ನು ಉತ್ತೇಜಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಆ) ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ನಿಗಮವನ್ನು (ಏಊಆಅ) ಯಾವಾಗ ಆರಂಭಿಸಲಾಯಿತು ಮತ್ತು ಅದರ ಕಾರ್ಯಸ್ಥಾನವೆಲ್ಲಿದೆ ;

(ಇ) ಕಳೆದ ಮೂರು ವರ್ಷಗಳ ಅವಧಿಯಲ್ಲಿ ಈ ನಿಗಮದಿಂದ ಹಾಗೂ ನಿಗಮದ ಸಹಾಯದಿಂದ ಉತ್ಪಾದಿಸಲಾದ ಒಟ್ಟು ಬಟ್ಟೆಯ ಪ್ರಮಾಣ ಮತ್ತು ಮೊತ್ತವೆಷ್ಟು ;

(ಈ) ಈ ಉತ್ಪಾದಿತ ಬಟ್ಟೆಯನ್ನು ಸರ್ಕಾರದ ಯೋಜನೆಯಲ್ಲಿರುವ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಗೆ ಮಾರಾಟ ಮಾಡಲಾಗುತ್ತಿದೆಯೇ; ಇದ್ದಲ್ಲಿ, ಕಳೆದ ಮೂರು ವರ್ಷಗಳ ವಹಿವಾಟಿನ ವಿವರ ನೀಡುವುದು;

(ಉ) ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ಕೇಂದ್ರ ಸ್ಥಾನವನ್ನು ಹುಬ್ಬಳ್ಳಿಗೆ ಸ್ಥಳಾಂತರಿಸಲಾಗಿದೆಯೇ; ಇದ್ದಲ್ಲಿ ಯಾವ ವರ್ಷದಲ್ಲಿ ಸ್ಥಳಾಂತರಿಸಲಾಯಿತು ;

(ಊ) ಸದರಿ ಸಂಸ್ಥೆಯನ್ನು ಸ್ಥಳಾಂತರಿಸಿದ ನಂತರ ಇದರ ಕಾರ್ಯಸ್ಥಾನವು ಹುಬ್ಬಳ್ಳಿಯಲ್ಲಿದೆಯೇ; ಅಥವಾ ನೆಪಕ್ಕೆ ಹುಬ್ಬಳ್ಳಿಯಲ್ಲಿದ್ದು, ಬೆಂಗಳೂರಿನಿಂದ ಕಾರ್ಯನಿರ್ವಹಿಸುತ್ತಿದೆ ಎಂಬುದಾಗಿ ಕೇಳಿ ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದಕ್ಕೆ ಇರುವ ಕಾರಣಗಳೇನು ? (ವಿವರ ನೀಡುವುದು)